ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ

# ವಾರ್ತಾಪತ್ರ

(ತ್ರೈಮಾಸಿಕ ಪತ್ರಿಕೆ)



ಪುಟ: ೦೭ (ಖಾಸಗಿ ಪ್ರಸಾರಕ್ಕಾಗಿ ಮಾತ್ರ) ಜುಲೈ-ಸೆಪ್ಟೆಂಬರ್ ೨೦೧೧ ಸಂಪಾದಕರು

ಸಂಚಿಕೆ: ೧೬ ಎಸ್.ವಿ. ಶ್ರೀನಿವಾಸರಾವ್



**ಪರಿವಿಡಿ**



ವಿಳಾಸ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭,೨೬೬೭೬೭೭೩
ಇಮೇಲ್ : bmsritrust@gmail.com

ಶಾಖೆ
**ಬಿ.ಎಂ.ಶ್ರೀ. ಶತಮಾನೋತ್ಸವ ಭವನ**
ಬೆಳ್ಳೂರು, ನಾಗಮಂಗಲ ತಾ||,
ಮಂಡ್ಯ ಜಿಲ್ಲೆ.

## ಕರ್ನಾಟಕದ ನೂತನ ಮುಖ್ಯಮಂತ್ರಿ



ಸಂಸದ ಸನ್ಮಾನ್ಯ ಶ್ರೀ ಡಿ. ವಿ. ಸದಾನಂದಗೌಡರು ಕರ್ನಾಟಕದ ೨೬ನೆಯ ನೂತನ ಮುಖ್ಯ ಮಂತ್ರಿಗಳಾಗಿ ದಿನಾಂಕ ೩-೮-೧೧ರಂದು ಅಧಿಕಾರ ವಹಿಸಿಕೊಂಡಿರುತ್ತಾರೆ. ನಗುಮುಖದ ಶ್ರೀಯುತರಿಗೆ ಹಾರ್ದಿಕ ಅಭಿನಂದನೆಗಳು ಹಾಗೂ ಹೃತ್ಪೂರ್ವಕ ಶುಭಾಶಯಗಳು.

ಪ್ರಮುಖವಾದ ಈ ಹುದ್ದೆಯ ನಿರ್ವಹಣೆಯಲ್ಲಿ ಇವರು ಸಂಪೂರ್ಣ ಯಶಸ್ವಿಯಾಗಿ ನಾಡಿನ ಕೀರ್ತಿ, ಗೌರವವನ್ನು ಹೆಚ್ಚಿಸುವಲ್ಲಿ ಸಫಲರಾಗಲಿ ಎಂದು ಆಶಿಸುತ್ತೇವೆ.

ಪ್ರೀತಿ, ಗೌರವಗಳೊಂದಿಗೆ

ಅಧ್ಯಕ್ಷರು
**ಪ್ರೊ. ಡಿ. ಲಿಂಗಯ್ಯ**
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಪರವಾಗಿ

# ಸಂಪಾದಕೀಯ

ನೂತನ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡಿರುವ ಸಂಸದ ಶ್ರೀ ಡಿ.ವಿ. ಸದಾನಂದಗೌಡರವರಿಗೆ ಅಭಿನಂದನೆ ಹಾಗೂ ಶುಭಾಶಯ ಸಲ್ಲಿಸುತ್ತಾ ಅವರಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಸವಿನಯಪೂರ್ವಕವಾಗಿ ಒಂದು ಮನವಿಯನ್ನು ಸಲ್ಲಿಸಬಯಸುತ್ತಿದೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಸನ್ಮಾನ್ಯ ಪ್ರೊ. ಎಂ.ವಿ.ಸೀತಾರಾಮಯ್ಯ ಅವರಿಂದ ಪೂಜ್ಯ ಗುರುಗಳಾಗಿದ್ದ ಕನ್ನಡದ ಕಣ್ವ ಬಿ.ಎಂ. ಶ್ರೀಕಂಠಯ್ಯ ಅವರ ಹೆಸರಿನಲ್ಲಿ ಸ್ಥಾಪನೆಗೊಂಡಿದ್ದು ಕಳೆದ ೩೨ ವರ್ಷಗಳಿಂದ ನಾಡು, ನುಡಿಯ ಸೇವೆಯನ್ನು ಅವಿರತವಾಗಿ ನಡೆಸಿಕೊಂಡು ಸರಕಾರ ಹಾಗೂ ಸರ್ವಜನರ ಮನ್ನಣೆಗೆ ಪಾತ್ರವಾಗಿದೆ. ಸನ್ಮಾನ್ಯರುಗಳಾದ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ, ಡಾ. ಚಿದಾನಂದಮೂರ್ತಿ, ಪ್ರೊ. ಎಲ್. ಎಸ್. ಶೇಷಗಿರಿರಾವ್, ನಾಡೋಜ ಜಿ. ನಾರಾಯಣ, ಡಾ. ಪಿ.ವಿ. ನಾರಾಯಣ, ಪ್ರೊ. ಎಂ.ಎಚ್ ಕೃಷ್ಣಯ್ಯ, ಪ್ರೊ. ಅ.ರ. ಮಿತ್ರ, ಪ್ರೊ. ಎನ್. ಬಸವಾರಾಧ್ಯ ದಿವಂಗತ ನಿಟ್ಟೂರು ಶ್ರೀನಿವಾಸರಾವ್, ವಿ.ಎಸ್. ಕೃಷ್ಣಯ್ಯರ್ ಮುಂತಾದ ಹಿರಿಯ ವಿದ್ವಾಂಸರುಗಳು ಪ್ರವೃದ್ಧಮಾನಕ್ಕೆ ಕಾರಣರಾಗಿದ್ದಾರೆ. ಈ ಸಂಸ್ಥೆಯ ಪ್ರಗತಿಯನ್ನು ಮೆಚ್ಚಿ ಹಿಂದಿನ ಮುಖ್ಯಮಂತ್ರಿಗಳಾಗಿದ್ದ ಸನ್ಮಾನ್ಯ ಡಾ. ಬಿ.ಎಸ್. ಯಡಿಯೂರಪ್ಪ ಅವರು ಉದಾರವಾಗಿ ೫೦ ಲಕ್ಷ ರೂಪಾಯಿಗಳ ಸಹಾಯಧನವನ್ನು ನೀಡುವುದಾಗಿ ದಿನಾಂಕ ೧೬-೧೨-೨೦೦೯ ರಂದು ಘೋಷಿಸಿದ್ದರು. ಕಾರಣಾಂತರಗಳಿಂದ ಅದಿನ್ನೂ ನಮ್ಮ ಕೈಸೇರಿರುವುದಿಲ್ಲ. **ಈಗಿನ ಸನ್ಮಾನ್ಯ ಮುಖ್ಯಮಂತ್ರಿಗಳು ಕೃಪೆಯಿಟ್ಟು ಇದನ್ನು ಮಂಜೂರು ಮಾಡಿ ಉಪಕರಿಸಬೇಕೆಂದು ವಿನಮ್ರವಾಗಿ ವಿನಂತಿಸಿಕೊಳ್ಳುತ್ತಿದ್ದೇವೆ.**

* * * *



ಪೂಜ್ಯರಾದ ಬಿ.ಎಂ.ಶ್ರೀ. ಅವರು ನಾಡು ಕಂಡ ಶ್ರೇಷ್ಠ ಪ್ರಾಧ್ಯಾಪಕರುಗಳಲ್ಲಿ ಗಣ್ಯರಾಗಿದ್ದಾರೆ. 'ಶ್ರೀ', 'ಆಚಾರ್ಯ'ರೆಂದು, ನವೋದಯ ಸಾಹಿತ್ಯ ಯುಗದ ನಿರ್ಮಾಪಕರೆಂದು ಖ್ಯಾತರಾಗಿದ್ದಾರೆ. ಇವರು ಮೈಸೂರು ವಿಶ್ವವಿದ್ಯಾನಿಲಯದ ಪ್ರಥಮ ಕನ್ನಡ ಪ್ರಾಧ್ಯಾಪಕರಾಗಿದ್ದ ಹೆಗ್ಗಳಿಕೆಗೂ ಪಾತ್ರರಾಗಿದ್ದಾರೆ. ಇವರ ಅಭಿಮಾನಿಗಳು, ಶಿಷ್ಯರು ಪ್ರಪಂಚಾದ್ಯಂತಾ ಹರಡಿದ್ದಾರೆ. ಇವರ ಬಗ್ಗೆ ಹಿರಿಯರು, ಕಿರಿಯರು ಕವಿತೆಗಳನ್ನು ರಚಿಸಿರುತ್ತಾರೆ. ಇವುಗಳನ್ನು ಸಂಗ್ರಹಿಸಿ ಒಂದು ಗ್ರಂಥವನ್ನು ಹೊರತರಲು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಮುಂದಾಗಿದೆ. ಪ್ರಸಿದ್ಧ ಸಾಹಿತಿ ಶ್ರೀ ಹೋ.ರಾ. ಸತ್ಯನಾರಾಯಣ ಅವರು ಈ ಸಂಕಲನದ ಸಂಪಾದಕರಾಗಿರುತ್ತಾರೆ.

ಆಚಾರ್ಯ ಬಿ.ಎಂ.ಶ್ರೀ. ಅವರ ಕುರಿತು ರಚಿಸಿರುವ ಕವಿತೆಗಳನ್ನು ಅಭಿಮಾನಿಗಳು ನಮ್ಮ ಪ್ರತಿಷ್ಠಾನಕ್ಕೆ ಕಳುಹಿಸಿ ಈ ಕಾರ್ಯ ಯಶಸ್ವಿಯಾಗಲು ಸಹಕರಿಸಬೇಕೆಂದು ಈ ಮೂಲಕ ಕೋರುತ್ತಿದ್ದೇವೆ.

**-ಎಸ್. ವಿ. ಶ್ರೀನಿವಾಸರಾವ್**
ಸಂಪಾದಕರು

# ಪ್ರತಿಷ್ಠಾನದ ವಾರ್ತೆ

**೨೧-೮-೨೦೧೧ ಭಾನುವಾರ ಬೆಳಗ್ಗೆ ೧೦-೦೦ ಗಂಟೆಗೆ ಓದು-ಬರಹ ಬಳಗ ಮತ್ತು 'ಸಿರಿಕಂಟ' ವೇದಿಕೆ** ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಹಯೋಗದಲ್ಲಿ ಪುಸ್ತಕಗಳ ಬಿಡುಗಡೆ ಕಾರ್ಯಕ್ರಮ ಹಮ್ಮಿಕೊಂಡಿದ್ದವು. ಖ್ಯಾತ ವಿಮರ್ಶಕರು, ವಿದ್ವಾಂಸರು ಆದ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀಗಳು ಶ್ರೀಮತಿ ಸಂಧ್ಯಾ ವಿ. ಅವರ 'ಕುಮಾರವ್ಯಾಸನ ವಿರಾಟ ಪರ್ವದ ವಿವಿಧ ಆವೃತ್ತಿಗಳು' ಗ್ರಂಥವನ್ನು, ಸೈಯದ್ ಮುಯಿನ್ ಅವರ 'ದಾಸ ಸಾಹಿತ್ಯದಲ್ಲಿ ರಾಮಾಯಣ ಪ್ರಸಂಗಗಳು' ಎಂಬ ಗ್ರಂಥಗಳನ್ನು ಲೋಕಾರ್ಪಣೆ ಗೊಳಿಸಿದರು. ನಿವೃತ್ತ ಪ್ರಾಧ್ಯಾಪಕ ಪ್ರೊ. ಜಿ. ಅಶ್ವತ್ಥನಾರಾಯಣ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿರುವ ಬಿ. ಎನ್. ಎಮ್. ಕಾಲೇಜಿನ ಪ್ರೊ. ರೂಪ ಕೆ. ಎಸ್., ಹಸನತ್ ಕಾಲೇಜಿನ ಪ್ರಾಂಶುಪಾಲರು ಪ್ರೊ. ಸೈಯದ್ ಸೈಫುಲ್ಲ ಹಸನತ್ ಪ್ರಥಮ ದರ್ಜೆ ಕಾಲೇಜಿನ ವಾಣಿಜ್ಯ ಶಾಸ್ತ್ರ ಮುಖ್ಯಸ್ಥರಾದ ಪ್ರೊ. ರಹಮತುಲ್ಲಾಖಾನ್ ಆಗಮಿಸಿದ್ದರು. ಡಾ. ನಾ. ಗೀತಾಚಾರ್ಯ ಲೋಕಾರ್ಪಣೆಗೊಂಡ ಗ್ರಂಥಗಳ ಪರಿಚಯ ಮಾಡಿಕೊಟ್ಟರು. ಕಾರ್ಯಕ್ರಮದ ಕೊನೆಯಲ್ಲಿ ಸ್ನಿಗ್ಧಾ ಎಸ್., ದ್ಯುತಿ ಎಸ್., ಕಾರ್ತಿಕೇಯ ಎಚ್. ಎಸ್. 'ಸಿರಿ ಸಂಗೀತ' ಕಾರ್ಯಕ್ರಮ ನಡೆಸಿಕೊಟ್ಟರು. ಓದು-ಬರಹ ಬಳಗದ ಶ್ರೀ ವೇಮಗಲ್ ಮೂರ್ತಿ, ಧೀರೇಂದ್ರ ಜಾಗೀರ್‌ದಾರ್, 'ಸಿರಿಕಂಟ' ವೇದಿಕೆಯ ಸುಂಕಂ ಗೋವರ್ಧನ್, ಡಾ. ಶ್ಯಾಮಲಾ ರತ್ನಕುಮಾರಿ ಕಾರ್ಯಕ್ರಮ ನಿರ್ವಹಿಸಿದರು.





**೨೮-೮-೨೦೧೧ ಭಾನುವಾರ ಸಂಜೆ ೫-೩೦ ಗಂಟೆಗೆ 'ಅನಂತರಂಗ ಸಂಶೋಧನ ದತ್ತಿ ಮತ್ತು ಶಾರದಮ್ಮ ಹನುಮಯ್ಯ ದತ್ತಿ ಪ್ರಶಸ್ತಿ ಪ್ರದಾನ ಸಮಾರಂಭ' ನಡೆಯಿತು.** ನಾಡೋಜ ಡಾ. ನಾರಾಯಣ ಅವರ ಅನುಪಸ್ಥಿತಿಯಲ್ಲಿ ಪ್ರೊ. ಡಿ. ಲಿಂಗಯ್ಯ ಅವರು ಸಮಾರಂಭವನ್ನು ಉದ್ಘಾಟಿಸಿದರು. ಖ್ಯಾತ ವಿಮರ್ಶಕ ಹಾಗೂ ನಿವೃತ್ತ ಪ್ರಾಧ್ಯಾಪಕ ಡಾ. ಸೀ. ವೀರಣ್ಣ ಅಧ್ಯಕ್ಷತೆ ವಹಿಸಿದ್ದರು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಪ್ರೊ. ಎಂ. ಎಚ್. ಕೃಷ್ಣಯ್ಯ ಅವರು ಶಾರದಮ್ಮ ಹನುಮಂತಯ್ಯ ದತ್ತಿ ಪ್ರಶಸ್ತಿ ವಿಜೇತರಾದ ಪ್ರೊ. ಚಂದ್ರಶೇಖರ ಪಾಟೀಲ ಅವರಿಗೆ ಹಾಗೂ ಅನಂತರಂಗ ಸಂಶೋಧನ ಗ್ರಂಥ ಪ್ರಶಸ್ತಿ ವಿಜೇತರಾದ ಶ್ರೀ ಎಸ್. ರಾಘವೇಂದ್ರರಾವ್ ಅವರಿಗೆ ಪ್ರಶಸ್ತಿಪತ್ರ ಹಾಗೂ ನಗದು ಬಹುಮಾನ ೧,೦೦೦/- ರೂ. ಗಳನ್ನು ನೀಡಿ ಅಭಿನಂದಿಸಿದರು. ಪ್ರಶಸ್ತಿಗೆ ಪಾತ್ರವಾಗಿದ್ದ ಕೃತಿಗಳು : ಚಂದ್ರಶೇಖರ ಪಾಟೀಲರ '**ಕನ್ನಡ ಕನ್ನಡ ಬರ್ರಿ ನಮ್ಮ ಸಂಗಡ**' ಮತ್ತು ಶ್ರೀ ಎಸ್. ರಾಘವೇಂದ್ರರಾವ್ ಅವರ '**ಶಿವನಗೆರೆ ದ್ವಿಜಾರಾಧ್ಯರು**'. ಪ್ರಶಸ್ತಿ ಪುರಸ್ಕೃತರ ಬಗ್ಗೆ ತೀರ್ಪುಗಾರರ ಪರವಾಗಿ ಡಾ. ಶ್ಯಾಮಲಾ ರತ್ನಕುಮಾರಿ, ಡಾ. ಎಸ್. ಪ್ರಸಾದಸ್ವಾಮಿ ಮಾತನಾಡಿದರು. ಕಾರ್ಯಕ್ರಮದ ಮೊದಲಲ್ಲಿ ಮತ್ತು ಕೊನೆಯಲ್ಲಿ ಶ್ರೀಮತಿ ಶಾಂತಾ ನಾಗರಾಜ್ ಅವರು 'ಸಿರಿ ಸಂಗೀತ' ಕಾರ್ಯಕ್ರಮ ನಡೆಸಿಕೊಟ್ಟರು.




ಕಾರ್ಯಕ್ರಮದ ಪ್ರಾರಂಭದಲ್ಲಿ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅತಿಥಿಗಳನ್ನು ಸ್ವಾಗತಿಸಿ ಅವರ ಪರಿಚಯ ಮಾಡಿಕೊಟ್ಟರು. ಡಾ. ನಾ. ಗೀತಾಚಾರ್ಯ ಕಾರ್ಯಕ್ರಮ ನಿರ್ವಹಿಸಿ ವಂದನಾರ್ಪಣೆ ಸಲ್ಲಿಸಿದರು.

## ೨ನೇ ಹಸ್ತಪ್ರತಿ ಅಧ್ಯಯನ ಸಮಾವೇಶದಲ್ಲಿ ಪ್ರಬಂಧ ಮಂಡಿಸಲು ಆಹ್ವಾನ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಸಂಸ್ಥಾಪಕರೂ ಪ್ರಸಿದ್ಧ ವಿದ್ವಾಂಸರೂ ಆಗಿದ್ದ ಎಂ.ವಿ. ಸೀತಾರಾಮಯ್ಯನವರ ಜನ್ಮಶತಮಾನೋತ್ಸವದ ನೆನಪಿಗಾಗಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿಶಾಸ್ತ್ರ–ಹಳಗನ್ನಡ–ಎಂ.ಫಿಲ್ ತರಗತಿ ವಿದ್ಯಾರ್ಥಿ ವೇದಿಕೆ 'ಸಿರಿಕಂಟ'ದ ವತಿಯಿಂದ ೨೦೧೧ ರಿಂದ 'ರಾಷ್ಟ್ರೀಯ ಹಸ್ತಪ್ರತಿ ಅಧ್ಯಯನ ಸಮಾವೇಶ' ಎಂಬ ಮುಕ್ತ ಅಧಿವೇಶನವನ್ನು ಆರಂಭಿಸಲಾಗಿದೆ. ಪ್ರಥಮ ಸಮಾವೇಶ ಶ್ರೀಕ್ಷೇತ್ರ ಧರ್ಮಸ್ಥಳದ ಉಜಿರೆಯಲ್ಲಿ ನಡೆಯಿತು. ೨ನೇ ಸಮಾವೇಶವನ್ನು ೨೦೧೨ರ ಜನವರಿ–ಫೆಬ್ರವರಿಯಲ್ಲಿ ಸೂಕ್ತ ಸ್ಥಳದಲ್ಲಿ ವ್ಯವಸ್ಥೆ ಮಾಡಲಾಗುತ್ತಿದೆ.

ಈ ಸಮಾವೇಶದಲ್ಲಿ ಪ್ರಾಚೀನ ಓಲೆಗರಿ–ಕಾಗದ–ಕಡತ ಇತ್ಯಾದಿ ಹಸ್ತಪ್ರತಿಗಳ ಬಗೆಗೆ ಮಾಹಿತಿ ಒದಗಿಸಬಹುದಾಗಿದೆ. ಹಸ್ತಪ್ರತಿಗಳಲ್ಲಿರುವ ವಿವಿಧ ವಿಷಯಗಳ ಬಗೆಗೆ ಅಧ್ಯಯನ ನಡೆಸಬಹುದಾಗಿದೆ. ಹಸ್ತಪ್ರತಿ ಸೂಚಿಗಳಲ್ಲಿರುವ ಪ್ರಶಸ್ತಿ ಬರಹಗಳಿಂದ ಸಾಂಸ್ಕೃತಿಕ ವಿಷಯಗಳನ್ನೂ ಹೆಕ್ಕಿ ಹೊರತೆಗೆಯಬಹುದಾಗಿದೆ. ಪ್ರಕಟವಾಗಿರುವ ಗ್ರಂಥಗಳ ಮೂಲ ಪಾಠಗಳ ಬಗ್ಗೆ ಹೊಸ ವಿಚಾರ ತಿಳಿಸಬಹುದಾಗಿದೆ. ಹೊಸದಾಗಿ ದೊರಕುವ ಹಸ್ತಪ್ರತಿಗಳ ಪರಿಚಯ ಮಾಡಿಕೊಡಬಹುದಾಗಿದೆ. ಇತಿಹಾಸ, ರಾಜಕೀಯ, ಧರ್ಮ, ಸಂಸ್ಕೃತಿ, ಶಿಲ್ಪ, ಚಿತ್ರ, ಸಂಗೀತ, ಸಾಹಿತ್ಯ ಕುಶಲ ಕಲೆ, ವೈದ್ಯ, ವಾಸ್ತುಶಾಸ್ತ್ರ, ಸಾಮಾಜಿಕ, ಜಾನಪದೀಯ; ಸ್ಥಳ–ವ್ಯಕ್ತಿನಾಮ ಇತ್ಯಾದಿ ವೈವಿಧ್ಯಮಯ ಸಂಗತಿಗಳನ್ನು ಹಸ್ತಪ್ರತಿಗಳಿಂದ ಹೊರತೆಗೆದು ಇಲ್ಲಿ ಪ್ರಸ್ತುತಪಡಿಸಬಹುದಾಗಿದೆ.

ಇದು ಮುಕ್ತ ಅಧಿವೇಶನವಾಗಿರುವುದರಿಂದ ಆಸಕ್ತರು ಯಾರು ಬೇಕಾದರೂ ಪ್ರಬಂಧ ಮಂಡಿಸಬಹುದು. ಇತಿಹಾಸ ಸಮ್ಮೇಳನದಂತೆಯೇ ಈ ಹಸ್ತಪ್ರತಿ ಸಮಾವೇಶವೂ ಸಕಲ ವ್ಯವಸ್ಥೆಗಳಿಂದ ಕೂಡಿರುತ್ತದೆ. ಆಸಕ್ತರು ಹೆಸರು–ವಿಳಾಸ ದಾಖಲಿಸಿದರೆ ಸಂಪರ್ಕಿಸಲಾಗುವುದು.


ಡಾ. ನಾ. ಗೀತಾಚಾರ್ಯ
ಗೌ॥ ಕಾರ್ಯದರ್ಶಿ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

ದೂರವಾಣಿ : ೨೬೬೧೫೮೭೭
೨೬೬೭೬೭೭೩
ಇ–ಮೇಲ್ : bmsritrust@gmail.com

# ಪುಸ್ತಕ ಪರಿಚಯ




**೧. ಸಹಸ್ರಮಾನದ ಕವಿಗಳು :**
ಸಂಪಾದಕರು : ಗೌರಿಸುಂದರ್.
ಪ್ರಕಾಶನ : ಸುಂದರ ಪ್ರಕಾಶನ. ಕಲಾ ಮಂದಿರ, ೫ನೆ ತಿರುವು, ಅ.ನ.ಸು. ರಸ್ತೆ, ಹನುಮಂತನಗರ, ಬೆಂಗಳೂರ-೧೯.
ಪುಟಗಳು : ೫೦೭+೧೬,
ಮುದ್ರಣ : ೨೦೧೧.
ಬೆಲೆ : ರೂ. ೩೧೦/-

ಇದೊಂದು ಬೃಹತ್ ಕೃತಿ. ಇದರಲ್ಲಿ ಸಾಹಿತ್ಯ ಕ್ಷೇತ್ರದ ಬಹಳಷ್ಟು ಪ್ರಾಚೀನ ಕವಿಗಳು ಹಾಗೂ ಅರ್ವಾಚೀನ ಕಾಲದ ಖ್ಯಾತ ಕವಿಗಳ ಕವನಗಳಿವೆ. (ಒಟ್ಟು ೧೫೬). ಈ ಎಲ್ಲಾ ಕೃತಿಗಾರರ ಭಾವಚಿತ್ರಗಳನ್ನೂ ಹಾಗೂ ಕವಿಗಳ ಪರಿಚಯವನ್ನೂ ಪ್ರಕಟಿಸಿರುವುದು ಈ ಕೃತಿಯ ವೈಶಿಷ್ಟ್ಯ. ಬಹಳ ಆಸ್ಥೆವಹಿಸಿ ಶ್ರೀ ಗೌರಿಸುಂದರ್ ಈ ಕೃತಿಯನ್ನು ಸಂಪಾದಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಇದೊಂದು ಕನ್ನಡ ಕವಿಗಳ ಬೃಹತ್ ಪ್ರಾತಿನಿಧಿಕ ಕವಿಗಳ ಸಂಕಲವಾಗಿದೆ. ಸಹಸ್ರಮಾನದ ಕವಿಗಳ ಗುಂಪಿಗೆ ಪ್ರಾಚೀನ ಕಾಲದ ಮುಖ್ಯ ಕವಿಗಳ ಸೇರ್ಪಡೆ ಆಗದಿರುವುದು ಕೊರತೆಯಾಗಿ ಕಾಣುತ್ತಿದೆ. ಇದನ್ನೂ ಶೀಘ್ರವೇ ಇನ್ನೊಂದು ಪುಟ್ಟ ಸಂಚಿಕೆಯಲ್ಲಿ ಹೊರತರುವ ಆಶ್ವಾಸನವನ್ನು ಸಂಪಾದಕರು ನೀಡಿದ್ದಾರೆ. ಅದೂ ಶೀಘ್ರದಲ್ಲೇ ಹೊರಬಂದು 'ಸಹಸ್ರಮಾನದ ಕವಿಗಳು' ಹೆಸರು ಸಾರ್ಥಕಗೊಳ್ಳಲಿ ಎಂದು ಆಶಿಸುತ್ತೇವೆ. ಇದು ಮಾಹಿತಿ ಗ್ರಂಥವಾಗಿರುವುದರಿಂದ ಎಲ್ಲಾ ಶಾಲಾ ಕಾಲೇಜು ಹಾಗೂ ಗ್ರಂಥಾಲಯಗಳಲ್ಲಿ ಇರಲೇಬೇಕಾದ ಕೃತಿಯಾಗಿದೆ. ಸಾಹಿತ್ಯ ಪ್ರಿಯರಿಗಂತೂ ಇದು ಆವಶ್ಯಕ ಪರಾಮರ್ಶನ ಗ್ರಂಥವಾಗಿದೆ.



**೨. ಕವಿರಾಜಮಾರ್ಗಂ :**
(ಪರಿಷ್ಕೃತ ಆವೃತ್ತಿ)
ಸಂಪಾದಕರು : ಎಂ. ವಿ. ಸೀತಾರಾಮಯ್ಯ,
ಪ್ರಕಾಶನ : ಎಂ.ವಿ.ಸೀ. ಸಮಗ್ರ ಗ್ರಂಥ ಪ್ರಕಟಣೆ; ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು-೫೬೦ ೦೦೨.
ಪ್ರಕಟನೆ : ೨೦೧೧.
ಪುಟಗಳು : XX+೫೦೯
ಬೆಲೆ : ರೂ. ೧೧೦/-

ಬೆಳಗಾವಿಯಲ್ಲಿ ನಡೆದ 'ವಿಶ್ವ ಕನ್ನಡ ಸಮ್ಮೇಳನ' ಅಂಗವಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸೃಜನೇತರ ಪ್ರಕಾರದ ೧೦೦ ಕೃತಿಗಳನ್ನು ಪ್ರಕಟಿಸಿದೆ. ಈ ಯೋಜನೆಯಡಿಯೇ ಈ ಮೇಲ್ಕಂಡ ಕೃತಿಯೂ ಪ್ರಕಟಗೊಂಡಿದೆ. 'ಕವಿರಾಜಮಾರ್ಗ' ಎಂ.ವಿ. ಸೀತಾರಾಮಯ್ಯ ಅವರ ಸಂಶೋಧನಾತ್ಮಕ ಮೇರುಕೃತಿ. 'ಕವಿರಾಜಮಾರ್ಗ'ದ ಕರ್ತೃ ನೃಪತುಂಗನಲ್ಲ. ಆತನ ಆಸ್ಥಾನದಲ್ಲಿದ್ದ 'ಶ್ರೀವಿಜಯ' ಎಂಬುವವನು ಎಂಬುದನ್ನು ಸೋದಾಹರಣವಾಗಿ ವಿವರಿಸಿದ ಆಚಾರ್ಯ ಕೃತಿ. ಇದು ವಿದ್ಯಾರ್ಥಿಗಳಿಗೆ ಆಕರಗ್ರಂಥವಾಗಿದೆ. ಇದರಲ್ಲಿ ಸಂಪಾದಕರು ಬಹಳ ಆಸ್ಥೆವಹಿಸಿ ವಿದ್ಯಾರ್ಥಿಗಳಿಗೆ ಅಗತ್ಯವಾಗಿ ಬೇಕೆನಿಸುವ ಕರ್ತೃತ್ವ ವಿಚಾರ, ಈ ಕೃತಿಯ ಬಗ್ಗೆ ಬಂದಿರುವ ಟೀಕೆ ಟಿಪ್ಪಣಿಗಳನ್ನು ಸಹ ನೀಡಿರುತ್ತಾರೆ.

**೩. ತೌಳವ ದಾಸ ದರ್ಶನ :**




ಸಂಗ್ರಹ ಸಂಪಾದಕಿ : ಬಿ. ಕೆ. ಶ್ರೀಮತಿ ರಾವ್
ಪ್ರಕಾಶಕರು : ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ, ದಕ್ಷಿಣ ಕನ್ನಡ.
ಮುದ್ರಣ : ೨೦೦೮
ಪುಟಗಳು : ೬೬೨+xxxiii
ಬೆಲೆ : ೩೦೦/-

ಈ ಧಾರ್ಮಿಕ ಗ್ರಂಥಕ್ಕೆ ಪೂಜ್ಯ ಶ್ರೀ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು, ಶ್ರೀಶ್ರೀಶ್ರೀ ಸುಗಣೇಂದ್ರತೀರ್ಥ ಶ್ರೀಪಾದಂಗಳವರು ಅನುಗ್ರಹ ಸಂದೇಶ ದಯಪಾಲಿಸಿದ್ದಾರೆ.

'ತೌಳವ ದಾಸ ದರ್ಶನ' ಹೆಸರಿಗೆ ತಕ್ಕಂತೆ ತುಳುನಾಡುವಿನಲ್ಲಿ ಬರುವಂಥ ಅನೇಕ ಹರಿದಾಸರುಗಳ ಸಂಗ್ರಹದ ಒಂದು ಸಂಕಲನ. ಇದರಲ್ಲಿ ಆಚಾರ್ಯ ಮಧ್ವರಿಂದ ಹಿಡಿದು ೨೦/೨೧ನೆಯ ಶತಮಾನದ ಬಪ್ಪನಾಡು ಭಗವಾನ್ ದಾಸರವರೆಗೆ ೫೫ ಹರಿದಾಸ ದಾಸರುಗಳನ್ನು ಜಾತಿಭೇದ, ಲಿಂಗ ಭೇದವಿಲ್ಲದೆ ಗುರುತಿಸಿದ್ದಾರೆ. ಅನೇಕ ಹರಿದಾಸರುಗಳ ಕೃತಿಗಳನ್ನೂ ಸಾಕಷ್ಟು ಸಂಗ್ರಹಿಸಿದ್ದಾರೆ. ಇದೊಂದು ಅತ್ಯಂತ ಉಪಯುಕ್ತ ಧಾರ್ಮಿಕ ಗ್ರಂಥ. ಸಂಗ್ರಹಯೋಗ್ಯ ಕೃತಿ.

೪. 'ಶ್ರೀ ಸೀತಾರಾವಣ ಸಂವಾದಝುರೀ :

ಲೇಖಕರು : ಶ್ರೀಮತಿ ಶಾಂತಾ ಶೈವಲಿನೀ.

ಪ್ರಕಾಶಕರು : ತೇಜು ಪಬ್ಲಿಕೇಷನ್ಸ್, ನಂ. ೨೩೩, ೭ನೇ 'ಎ' ಅಡ್ಡರಸ್ತೆ, ಶಾಸ್ತ್ರಿನಗರ, ಬೆಂಗಳೂರು-೫೬೦ ೦೨೮.

ಪ್ರಕಟನೆ : ೨೦೧೦.

ಪುಟಗಳು : ೨೯೨+

ಬೆಲೆ : ರೂ. ೧೪೮/-




ಇದು ಅತ್ಯತ್ತಮ ಕಾರ್ಯವೆಂದು ಪರಿಗಣಿಸಲ್ಪಟ್ಟಿದ್ದು ವಿದ್ವಜ್ಜನರ ಪ್ರಶಂಸೆಗೆ ಪಾತ್ರವಾಗಿದೆ. ಸೀತಾ-ರಾವಣ ಸಂವಾದವೇ ಕಾವ್ಯದ ಮೂಲವಸ್ತು. ಸಂಸ್ಕೃತದಿಂದ ಕನ್ನಡಕ್ಕೆ ಶ್ರೀಮತಿ ಶಾಂತಾ ಶೈವಲಿನೀ ಅವರು ಬಹಳ ಅರ್ಥವತ್ತಾಗಿ ಅನುವಾದಿಸಿರುತ್ತಾರೆ. ಶ್ರೀಯುತ, ಎನ್. ರಾಮನಾಥ್, ಶತಾವಧಾನಿ ಡಾ. ಆರ್. ಗಣೇಶ್ ಅವರು ಉಪಯುಕ್ತ ಸಲಹೆ ಸೂಚನೆ ಗಳನ್ನಿತ್ತು ಕೃತಿಯ ಮೌಲ್ಯವನ್ನು ಹೆಚ್ಚಿಸಿರುತ್ತಾರೆ. 'ಶ್ರೀ ಸೀತಾರಾವಣ ಸಂವಾದಝುರಿ' ಕೃತಿಯ ಮೂಲ ಲೇಖಕರು ಚಾಮರಾಜನಗರ ರಾಮಶಾಸ್ತ್ರಿಗಳು. ಇವರು ಕೃತಿಯಲ್ಲಿ ಶಾರ್ದೂಲ ವಿಕ್ರೀಡಿತ, ಶಿಖರಿಣಿ, ಪೃಥಿವೀ ಮಂದಾಕ್ರಾಂತ, ಮಂಜುಭಾಷಿಣೀ, ಸ್ರಗ್ಧರಾ, ರಥೋದ್ಧತಾ, ಮಾಲಿನೀ, ಪ್ರಹರ್ಷಿಣೀ, ಹರಿಣೀ, ಅನುಷ್ಟಪ್ ಮುಂತಾದ ಛಂದಸ್ಸಿನ ಪ್ರಯೋಗವನ್ನು ಯಶಸ್ವಿಯಾಗಿ ಮಾಡಿರುತ್ತಾರೆ. ಮೂಲಕೃತಿಗೆ ಲೋಪ ಬರದಂತೆ ಅನುವಾದಕರು ಶ್ರದ್ಧೆ ವಹಿಸಿದ್ದಾರೆ. ಲೇಖಕಿಯವರು ಪ್ರತಿ ಶ್ಲೋಕಕ್ಕೆ ಅನ್ವಯಾರ್ಥ, ಪದಾರ್ಥ, ತಾತ್ಪರ್ಯ ನೀಡಿ ಓದುಗರಿಗೆ ಬಹಳ ಉಪಕಾರ ಮಾಡಿರುತ್ತಾರೆ. ಇದು ಸ್ತುತ್ಯರ್ಹ ಕಾರ್ಯವಾಗಿದೆ. ಇದೊಂದು ಅಪರೂಪದ ಸಂಗ್ರಹಯೋಗ್ಯ ಕೃತಿ.




೫. ನಾಗಾರ್ಜುನ-ಅಲ್ಲಮಪ್ರಭು: (ಒಂದು ತೌಲನಿಕ ಅಧ್ಯಯನ)

ಲೇಖಕರು : ಎಸ್. ನಟರಾಜ ಬೂದಾಳು

ಪ್ರಕಟನೆ : ಗೋಧೂಳಿ ಪ್ರಕಾಶನ, ನಂ. ೩೫, ೫ನೇ ಬಿ. ಅಡ್ಡರಸ್ತೆ, ಸಿಂಡಿಕೇಟ್ ಬ್ಯಾಂಕ್ ಬಡಾವಣೆ, ತುಂಗಾನಗರ, ಬೆಂಗಳೂರು-೯೧.

ಪುಟಗಳು : xxii + ೧೭೪=೧೯೬.

ಬೆಲೆ : ರೂ. ೧೨೦/-

ಮುದ್ರಣ : ೨೦೧೦.

ನಾಗಾರ್ಜುನ ಮತ್ತು ಅಲ್ಲಮಪ್ರಭು ಖ್ಯಾತ ದಾರ್ಶನಿಕರು. ಬನವಾಸಿ - ಬಳ್ಳಿಗಾವೆ ಅವರ ಪ್ರಥಮ ಕಾರ್ಯಕ್ಷೇತ್ರ. ನಾಗಾರ್ಜುನ ಬುದ್ಧ ಗುರುವಿನ ಉಪದೇಶವನ್ನಾಧರಿಸಿ ವಿಶ್ವಕ್ಕೆ ಮಹಾಯಾನ ಪ್ರಸ್ಥಾನ ರೂಪಿಸಿ ಕೊಟ್ಟವನು. ನಾಗಾರ್ಜುನ ಮತ್ತು ಅಲ್ಲಮಪ್ರಭುಗಳ ಮಧ್ಯೆ ಸಾವಿರ ವರ್ಷಗಳ ಅಂತರವಿದೆ. ಇವರಿಬ್ಬರನ್ನೂ ಬಳ್ಳಿಗಾವೆಗೆ ಆಗಮಿಸಿದ್ದ ಹುಯನ್‌ತ್ಸಾಂಗ್ ತನ್ನ ಗ್ರಂಥದಲ್ಲಿ ಪ್ರಸ್ತಾಪಿಸಿದ್ದಾನೆ.

೬. ಮಾನ್ಯಖೇಟದ ರಾಷ್ಟ್ರಕೂಟರು : (ಚಾರಿತ್ರಿಕ ಅಧ್ಯಯನ)

ಲೇಖಕರು : ಡಾ. ಶ್ಯಾಮಲಾ ರತ್ನಕುಮಾರಿ ಬೆಂ.ಶಾ.

ಪ್ರಕಾಶಕರು : ಅಳಿಲು ಸೇವಾ ಸಂಸ್ಥೆ. ನಂ. ೧೩೩. ಮೊದಲನೆ ಮಹಡಿ, ಕೆ.ಆರ್.ರಸ್ತೆ, ಓಬಳಪ್ಪ ಗಾರ್ಡನ್,ಬೆಂಗಳೂರು-೮೨

ಪುಟಗಳು : ೧೫೮ + iv. ಬೆಲೆ : ರೂ. ೭೫/-

ಮುದ್ರಣ : ೨೦೦೯

ಎರಡು ಶತಮಾನಕ್ಕೂ ಹೆಚ್ಚು ಕಾಲ ಕರ್ನಾಟಕದ ವಿವಿಧ ಭಾಗಗಳಲ್ಲಿ ರಾಷ್ಟ್ರಕೂಟರ ಸಾಮ್ರಾಜ್ಯ ಹರಡಿತ್ತು. ಆ ಕಾಲದ ರಾಜನೀತಿ, ವೈಭವ, ಆರ್ಥಿಕ ಅಭಿವೃದ್ಧಿ-ಜನಜೀವನದ ಬಗ್ಗೆ ಪಾಶ್ಚಾತ್ಯ, ಪೌರಾತ್ಯ ಪ್ರವಾಸಿಗರು ಮುಕ್ತಕಂಠದಿಂದ ಪ್ರಶಂಸಿದ್ದಾರೆ. ರಾಷ್ಟ್ರಕೂಟದ ಬಹುಪಾಲು ಸಾಧನೆಗಳು ಕೈಗೊಂಡಿದ್ದು ಖ್ಯಾತಿವೆತ್ತಿದ್ದು ಮಾನ್ಯಖೇಟ ರಾಜಧಾನಿಯಾದ ಮೇಲೆಯೇ. ಆದುದರಿಂದಲೇ ಇವರನ್ನು ಮಾನ್ಯಖೇಟದ ರಾಷ್ಟ್ರಕೂಟರೆಂದೇ ಗುರುತಿಸಲಾಗುತ್ತದೆ. ಈ ಲೇಖನಗಳಲ್ಲಿ ಧಾರ್ಮಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸಾಧನೆಗಳಿಗೆ ಕನ್ನಡಿ ಹಿಡಿಯಲಾಗಿದೆ.




ಡಾ. ಶ್ಯಾಮಲಾ ರತ್ನಕುಮಾರಿಯವರು ಬಹಳ ಶ್ರಮವಹಿಸಿ ರಾಷ್ಟ್ರಕೂಟ ಸಾಮ್ರಾಜ್ಯದ ಇತಿಹಾಸವನ್ನು ಸಂಕ್ಷಿಪ್ತವಾಗಿ ಆದರೆ ಪರಿಣಾಮಕಾರಿಯಾಗಿ ವಿವರಿಸಿದ್ದಾರೆ. ಇದು ಚರಿತ್ರೆಕಾರರಿಗೆ ಬಹಳ ಉಪಯುಕ್ತ ಮಾಹಿತಿ ನೀಡುತ್ತದೆ. ಸಂಗ್ರಹಯೋಗ್ಯ ಕೃತಿಯೆಂದು ಧಾರಾಳವಾಗಿ ಹೇಳಬಹುದು.

# ಸಾದರ-ಸ್ವೀಕಾರ

೧. **ಶ್ರೀ ಶಿರಡಿ ಸಾಯಿಬಾಬಾರವರ ಜೀವನ ಚರಿತ್ರೆ :** ಅನುವಾದ: ಶ್ರೀಮತಿ ಸುಕನ್ಯ ವಿಜಯಕುಮಾರ್ (ಮೂಲಕೃತಿ : ಸಂದೀಪ್‌ಗರ್ಗ). ಪ್ರಕಾಶನ: ನಂ. ೫೨, ೧ನೇ ಅಡ್ಡರಸ್ತೆ, ಲಕ್ಕಸಂದ್ರ, ಬೆಂಗಳೂರು-೩೦. ಪುಟಗಳು: ೮+೮೫. ಪ್ರಕಟಣೆ : ೨೦೧೧, ಬೆಲೆ : ರೂ. ೫೦/-

೨. **ಹೊಸ ಬೆಳಕು :** (ಕಥಾಸಂಕಲನ) : ಲೇಖಕರು : ಪಾನ್ಯಂ ನಟರಾಜ ಮಾಗಡಿ. ಪ್ರಕಾಶನ : ಬುದ್ಧ, ಬಸವ, ಗಾಂಧಿ ಸಾಂಸ್ಕೃತಿಕ ಟ್ರಸ್ಟ್ (ರಿ.) ೨೪/೧೬-೧, ೯ನೇ ಅಡ್ಡರಸ್ತೆ, ೧ನೇ ಮುಖ್ಯರಸ್ತೆ, ದೀಪಾಂಜಲಿನಗರ, ಬೆಂಗಳೂರು-೨೬. ಪುಟಗಳು : xi + ೧೫೮. ಬೆಲೆ : ರೂ. ೧೦೦/-, ಮುದ್ರಣ : ೨೦೧೧.

೩. **ಎಂ. ಎಲ್. ಶ್ರೀಕಂಠೇಶಗೌಡರ ನಾಟಕಗಳು :** (ತೌಲನಿಕ ಅವಲೋಕನ). ಲೇಖಕರು : ಕಾಂತರಾಜ ಸುರೇಶ್. ಪ್ರಕಾಶಕರು : ವಸು ಪ್ರಕಾಶನ, ನಂ. ೧೨೫೦, ೯ನೇ ಮುಖ್ಯರಸ್ತೆ, ಪ್ರಕಾಶನಗರ, ಬೆಂಗಳೂರು-೨೧. ಪುಟಗಳು: xii+೧೧೨. ಬೆಲೆ : ರೂ. ೮೦/-. ಮುದ್ರಣ : ೨೦೧೧.

೪. **೧. ಶ್ರೀ ಹರಿಗುರು ಸ್ತುತಿ ಮಣಿಮಾಲಾ ಮತ್ತು (೨) ಶ್ರೀ ಶ್ರೀನಿವಾಸ ಕಲ್ಯಾಣ :** (ಭಜನೆಗಳು, ಪದ್ಯಗಳು) ಲೇಖಕರು: ಬಿ. ಕೆ. ಶ್ರೀಮತಿ ರಾವ್(ಶ್ರೀ ಗುರುಪ್ರಿಯಪಾತಲದಾಸಿ). ಪ್ರಕಾಶನ : ಶ್ರೀ ಗುರುಪ್ರಿಯ ಪ್ರಕಾಶನ, C/o ಕರಾವಳಿ ಟ್ರೇಡರ್ಸ್, ಕಪಿತಾನಿಯೋ ಶಾಲೆಯ ಬಳಿ, ಕಂಕನಾಡಿ, ಮಂಗಳೂರು-೫೭೫ ೦೦೨. ಪುಟಗಳು : (೧) ೫೨. ಬೆಲೆ : ರೂ. ೩೦/-. (೨) ಪುಟಗಳು : ೬೦. ಬೆಲೆ : ರೂ. ೩೦/-. ಮುದ್ರಣ : ೨೦೧೧.

೫. **ಅನ್ವೇಷಣೆ :** (ವಿಮರ್ಶಾ ಲೇಖನಗಳು) : ಲೇಖಕರು : ಕಾಂತರಾಜಪುರ ಸುರೇಶ್. ಪ್ರಕಾಶಕರು : ವಸು ಪ್ರಕಾಶನ. ಬೆಂಗಳೂರು-೨೧. ಪುಟಗಳು : xii+೧೦೮. ಬೆಲೆ : ರೂ. ೮೦/-. ಮುದ್ರಣ : ೨೦೧೦.

೬. **ಹರಟೆ ಮಲ್ಲಾಯಣ :** (ಪ್ರಬಂಧಗಳು) ಲೇಖಕರು : ಎಸ್. ರಾಮಪ್ರಸಾದ್. ಪ್ರಕಾಶನ : ಸುಸ್ಮಿತಾ ಪ್ರಕಾಶನ. ನಂ. ೭೫, ೧೫ನೇ ಕ್ರಾಸ್, E ಬ್ಲಾಕ್, ಜೆ. ಪಿ. ನಗರ, ಬೆಂಗಳೂರು-೫೬೦೦೦೮. ಪುಟಗಳು : ೧೩೨+xviii ಬೆಲೆ: ರೂ. ೧೫೦/-. ಮುದ್ರಣ : ೨೦೦೯.

೭. **ದೇಶದೊಲುಮೆಯ ಕಂಪ ಬೀರಿದ ಸುಮಗಳು :** (ಗೀತೆಗಳು) ಲೇಖಕರು : ಎಸ್. ಮಲ್ಲಿಕಾರ್ಜುನಪ್ಪ. ಪ್ರಕಾಶಕರು : ಕನ್ನಡಮ್ಮ ಪ್ರಕಾಶನ, ೩೩೬೭/೩ಎ೧, ಕನ್ನಡಮ್ಮನ ಕೃಪಾ ಕುಟಿರ, ಎಂ.ಸಿ.ಸಿ. ಬಿ. ಬ್ಲಾಕ್, ದಾವಣಗೆರೆ-೫೭೭ ೦೦೪. ಪುಟಗಳು : xii+೪೨+೬. ಬೆಲೆ : ರೂ. ೬೦/- ಮುದ್ರಣ : ಜನವರಿ ೨೦೧೧.

೮. **ನಮ್ಮ ಸಂಸ್ಕೃತ ಕಾಲೇಜುಗಳು :** (ಕಾಲೇಜುಗಳ ಬಗ್ಗೆ ವಿವರಗಳು) ಸಂಕಲನ ನಿರೂಪಣೆ : ಗೂಳೂರು ಚನ್ನವೀರಸ್ವಾಮಿ. ಪ್ರಕಾಶಕರು : ಭಾಗ್ಯಶ್ರೀ ಪ್ರಕಾಶನ, ಶ್ರೀ ಸಿದ್ಧಲಿಂಗೇಶ್ವರ ನಿಲಯ, ನಂ. ೮, ೮ನೇ ಅಡ್ಡರಸ್ತೆ, ೩ನೇ ಮುಖ್ಯರಸ್ತೆ, ಹನುಮಂತನಗರ, ಬೆಂಗಳೂರು-೧೯. ಪುಟಗಳು : viii + ೭೨, ಬೆಲೆ : ರೂ. ೪೦/-, ಮುದ್ರಣ : ಜೂನ್ ೨೦೧೧.

೯. **ಎದೆಯ ಪದ :** (ಕವನ ಸಂಕಲನ), ಲೇಖಕರು : ಕೋ. ವೆಂ. ರಾಮಕೃಷ್ಣೇಗೌಡ. ಪ್ರಕಾಶನ : ಗೋಧೂಳಿ ಪ್ರಕಾಶನ, ನಂ. ೩೫, ೫ನೇ 'ಬಿ' ಅಡ್ಡರಸ್ತೆ, ಸಿಂಡಿಕೇಟ್ ಬ್ಯಾಂಕ್ ಬಡಾವಣೆ, ತುಂಗಾನಗರ, ಬೆಂಗಳೂರು-೯೧. ಪುಟಗಳು : xii+೬೪=೭೬. ಬೆಲೆ : ರೂ. ೫೦/-. ಮುದ್ರಣ : ೨೦೧೦ (ಪ್ರಥಮ).

೧೦. **ಸಿರಿಮುಡಿ :** (ಪೌರಾಣಿಕ ನಾಟಕ) ಲೇಖಕರು : ಕೆಂಕೆರೆ ಹನುಮಂತೇಗೌಡ. ಪ್ರಕಾಶನ : ಗೋಧೂಳಿ ಪ್ರಕಾಶನ, ನಂ. ೩೫, 'ಗೋಧೂಳಿ', ೫ನೇ 'ಬಿ' ಕ್ರಾಸ್, ಸಿಂಡಿಕೇಟ್ ಬ್ಯಾಂಕ್ ಬಡಾವಣೆ, ತುಂಗಾನಗರ, ಬೆಂಗಳೂರು-೯೧. ಪುಟಗಳು : xvi+೫೨. ಬೆಲೆ : ರೂ. ೫೦/-. ಮುದ್ರಣ: ೨೦೧೦ (ಪ್ರಥಮ).

೧೧. **ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಮೇಲೆ ಪಾಶ್ಚಾತ್ಯ ಪ್ರಭಾವ ಮತ್ತು ಪರಿಣಾಮ :** ಲೇಖಕರು : ಪ್ರೊ. ದೊಡ್ಡಸ್ವಾಮಿ. ಪ್ರಕಾಶಕರು : ಶ್ರೀಮತಿ ಅನುಸೂಯಾದೇವಿ, ಪ್ರೊ. ದೊಡ್ಡಸ್ವಾಮಿ, ನಂ. ೭೯೨, 'ರಾಘವೇಂದ್ರ ನಿಲಯ', ೪ನೇ ಸ್ಟೇಜ್, ೧ನೇ ಹಂತ, ವಿಜಯನಗರ, ಮೈಸೂರು-೫೭೦ ೦೧೭. ಪುಟಗಳು : vii+೧೧೭. ಬೆಲೆ : ರೂ. ೧೦೦/-. ಮುದ್ರಣ : ೨೦೧೧.

೧೨. **ಆಕಾಶದ ಶ್ರೀಮಂತಿಕೆ :** (ಆಕಾಶದ ಬಗ್ಗೆ ಮಾಹಿತಿ) ಲೇಖಕರು : ಎಸ್. ರಾಮಪ್ರಸಾದ್. ಪ್ರಕಟಣೆ : ಸ್ಕಾಲರ್ಸ್ ಬುಕ್ ಸೀರೀಸ್, ನಂ. ೪೩೫, ೮ನೇ ಮುಖ್ಯರಸ್ತೆ, ಸರಸ್ವತಿಪುರ, ಮೈಸೂರು-೫೭೦ ೦೦೯. ಪುಟಗಳು : ೬೪+viii. ಬೆಲೆ : ರೂ. ೩೦/-. ಮುದ್ರಣ : ೨೦೦೬ (ಪ್ರಥಮ).

## ಅಭಿನಂದನೆಗಳು

೧. **ಕೇಂದ್ರ ಸಾಹಿತ್ಯ ಅನುವಾದ ಪ್ರಶಸ್ತಿ** : (೨೦೧೦) ಡಾ. ಎ.ಜಾನಕಿಯವರು ಅನುವಾದಿಸಿರುವ ಪ್ರೇಮಚಂದ್ರರ 'ಗೋದಾನ' ಕನ್ನಡ ಅನುವಾದಕ್ಕೆ ಪ್ರಶಸ್ತಿ ದೊರೆತಿದೆ. (೫೦ ಸಾವಿರ ನಗದು ಮತ್ತು ಸ್ಮರಣಿಕೆ).

೨ **ಶ್ರೀ ಮನು ಬಳಿಗಾರ್** : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರಾಗಿದ್ದ ಶ್ರೀಯುತರಿಗೆ ಸರ್ಕಾರ ಭಡ್ತಿ ನೀಡಿ ಆಯುಕ್ತರನ್ನಾಗಿ ನೇಮಿಸಿ, ಅದೇ ಇಲಾಖೆಯಲ್ಲಿ ಇರಿಸಿಕೊಂಡಿದೆ.

೩ **ರೇಮನ್ ಮ್ಯಾಗ್ಸೆಸೆ ಪ್ರಶಸ್ತಿ** : (೨೦೧೧) ಕುಂದಾಪುರ ತಾಲ್ಲೂಕಿನ ಎಂಜಿನಿಯರ್ ಹರಿಶ್ ಹಂದೆ ಅವರಿಗೆ ಸಂದಿದೆ. ಸೌರ ವಿದ್ಯುತ್ ಕ್ಷೇತ್ರದಲ್ಲಿ ಅಪಾರ ಸಾಧನೆ ಮಾಡಿರುತ್ತಾರೆ. ೧.೨೦ ಲಕ್ಷ ಮನೆಗಳಿಗೆ ಸೌರ ವಿದ್ಯುತ್ ಅಳವಡಿಸಿದ್ದಾರೆ.

೪. **ಕರ್ನಾಟಕದ ೨೬ನೇ ಮುಖ್ಯಮಂತ್ರಿ** : ಸಂಸದ ಶ್ರೀ ಡಿ. ವಿ. ಸದಾನಂದಗೌಡರು ಕರ್ನಾಟಕದ ನೂತನ ಮುಖ್ಯಮಂತ್ರಿಯಾಗಿ ದಿನಾಂಕ ೩-೮-೧೧ ರಂದು ಅಧಿಕಾರ ಸ್ವೀಕರಿಸಿದ್ದಾರೆ.

೫. ಕೇಂದ್ರ ಸಾಹಿತ್ಯ ಅಕಾಡೆಮಿಯ **ಬಾಲ ಸಾಹಿತ್ಯ ಪುರಸ್ಕಾರ**: (೨೦೧೧) ನಾಡಿನ ಖ್ಯಾತ ಸಾಹಿತಿ ಶ್ರೀ ನಾ. ಡಿಸೋಜಾ ಅವರಿಗೆ ಸಂದಿದೆ. (೫೦,೦೦೦ ನಗದು+ಫಲಕ).

೬ **ವಿ. ಕೃ. ಗೋಕಾಕ್ ಪ್ರಶಸ್ತಿ** : (೨೦೧೧) ಪ್ರೊ. ಎಲ್.ಎಸ್. ಶೇಷಗಿರಿರಾವ್, ಪ್ರೊ. ಎಸ್.ಆರ್. ರೋಹಿಡೆಕರ್, ಎಸ್.ಆರ್. ಮಳಗಿಯವರಿಗೆ ಭಾರತೀಯ ವಿದ್ಯಾಭವನ ಮತ್ತು ವಿನಾಯಕ ಗೋಕಾಕ ವಾಙ್ಮಯ ಟ್ರಸ್ಟ್ ನೀಡುವ ಈ ಪ್ರಶಸ್ತಿ ಸಂದಿದೆ.

೭ **ಪಂಪ ಪ್ರಶಸ್ತಿ** : ೨೦೦೯ನೇ ಸಾಲಿನ ಈ ಪ್ರಶಸ್ತಿ ಪ್ರೊ. ಚಂದ್ರಶೇಖರ ಪಾಟೀಲ ಅವರಿಗೆ ನೀಡಲಾಗುತ್ತದೆ ಎಂದು ಸರ್ಕಾರಿ ಪ್ರಕಟಣೆ ತಿಳಿಸಿದೆ. ಬನವಾಸಿಯಲ್ಲಿ ನಡೆಯುವ ಕದಂಬ ಉತ್ಸವದಲ್ಲಿ ಈ ಪ್ರಶಸ್ತಿ ವಿತರಿಸಲಾಗುವುದು.

೮ **ಜ್ಞಾನಪೀಠ ಪ್ರಶಸ್ತಿ** : (೨೦೧೦) ನಾಡೋಜ ಡಾ. ಚಂದ್ರಶೇಖರ ಕಂಬಾರ ಅವರಿಗೆ ಈ ಪ್ರತಿಷ್ಠಿತ ಪ್ರಶಸ್ತಿ ಪ್ರಾಪ್ತವಾಗಿದೆ. ಇದು ಕನ್ನಡ ಸಾಹಿತ್ಯಕ್ಕೆ ದೊರೆಯುತ್ತಿರುವ ೮ನೇ ಜ್ಞಾನಪೀಠ ಪ್ರಶಸ್ತಿಯಾಗಿದೆ.

೯. **ಸರ್ ಎಂ. ವಿಶ್ವೇಶ್ವರಯ್ಯ ಸ್ಮಾರಕ ಪ್ರತಿಷ್ಠಾನ ಪ್ರಶಸ್ತಿ** : ಧರ್ಮಸ್ಥಳದ ಧರ್ಮಾಧಿಕಾರಿ ಡಾ. ಡಿ. ವೀರೇಂದ್ರ ಹೆಗ್ಗಡೆಯವರಿಗೆ ಸಂದಿದೆ. (೧೫-೯-೧೧).

೧೦. **ಗಮಕ ಪರಿಷತ್ತಿನ ಅಧ್ಯಕ್ಷ ಸ್ಥಾನ** : ಗಮಕಿ ಶ್ರೀ ಎಂ.ಆರ್. ಸತ್ಯನಾರಾಯಣ ಅವರು ೩ ವರ್ಷದ ಅವಧಿಗೆ ಸರ್ವಾನುಮತ ದಿಂದ ಆಯ್ಕೆಗೊಂಡಿದ್ದಾರೆ.

೧೧. **ನೃಪತುಂಗ ಸಾಹಿತ್ಯ ಪ್ರಶಸ್ತಿ** (೨೦೧೧) : ಬಿ.ಎಂ.ಟಿ.ಸಿ. ಮತ್ತು ಕ.ಸಾ. ಪರಿಷತ್ತು ನೀಡುವ ಈ ಪ್ರತಿಷ್ಠಿತ ಪ್ರಶಸ್ತಿಗೆ ಖ್ಯಾತ ಸಂಶೋಧಕ ಡಾ. ಎಂ. ಎಂ. ಕಲಬುರ್ಗಿ ಅವರು ಸಂಶೋಧನಾ ಕ್ಷೇತ್ರದ ಸಾಧನೆಗಾಗಿ ಆಯ್ಕೆಗೊಂಡಿರುತ್ತಾರೆ.

೧೨. **ಟಿಪ್ಪು ಪ್ರಶಸ್ತಿಗಳು** : ಅಖಿಲ ಕರ್ನಾಟಕ ಮಹಮದೀಯ ಕನ್ನಡ ವೇದಿಕೆ ನೀಡುವ ಮೈಸೂರು ಹುಲಿ ಟಿಪ್ಪುಸುಲ್ತಾನ್ ಪ್ರಶಸ್ತಿಗೆ ಪ್ರೊ. ಬರಗೂರು ರಾಮಚಂದ್ರಪ್ಪ ಅವರಿಗೆ ಲಭಿಸಿದೆ (೧೬-೧೦-೧೧). ೧೦ ಸಾವಿರ ರೂ. ನಗದು ಮತ್ತು ಫಲಕ.

**ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಮೇಲ್ಕಂಡ ಎಲ್ಲಾ ಪ್ರಶಸ್ತಿ ವಿಜೇತರಿಗೂ ಹಾರ್ದಿಕ ಅಭಿನಂದನೆಯೊಡನೆ ಶುಭಾಶಯ ಕೋರುತ್ತಿದೆ.**

## ಶ್ರದ್ಧಾಂಜಲಿ

ಖ್ಯಾತ ವಿದ್ವಾಂಸರು, ಬೆಂಗಳೂರು ಭಾರತೀಯ ವಿದ್ಯಾ ಭವನದ ನಿರ್ದೇಶಕರಾಗಿದ್ದ ಡಾ. ಮತ್ತೂರು ಕೃಷ್ಣಮೂರ್ತಿ (೮೨) ಅವರು ದಿನಾಂಕ ೬-೧೦-೧೧ ರಂದು ನಿಧನರಾದರು. (ಜೀವಿತ ಕಾಲ : ೮-೮-೧೯೨೯ ರಿಂದ ೬-೧೦-೧೧). ಲಂಡನ್‌ನಲ್ಲಿನ ವಿದ್ಯಾಭವನದಲ್ಲಿ, ರಿಜಿಸ್ಟ್ರಾರ್ ಆಗಿ ಸುಮಾರು ೨೩ ವರ್ಷ ನಿಸ್ಪೃಹ ಸೇವೆ ಸಲ್ಲಿಸಿದ್ದ 'ಭಾರತದ ಸಾಂಸ್ಕೃತಿಕ ರಾಯಭಾರಿ' ಎಂದೇ ಖ್ಯಾತರಾಗಿದ್ದರು. ಕೇಂದ್ರ ಸರ್ಕಾರದ 'ಪದ್ಮಶ್ರೀ' ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಆಳ್ವಾಸ್ ನುಡಿಸಿರಿ ಪ್ರಶಸ್ತಿಗಳಿಗೆ ಭಾಜನರಾಗಿದ್ದರು. ಸೃಜನಶೀಲ ಹಾಗೂ ಸೃಜನೇತರ ಕ್ಷೇತ್ರಗಳಲ್ಲಿ ೪೦ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ರಚಿಸಿರುತ್ತಾರೆ.

ಇವರಿಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಗೌರವಪೂರ್ವಕವಾಗಿ ಶ್ರದ್ಧಾಂಜಲಿ ಅರ್ಪಿಸುತ್ತಿದೆ.

**ಅಚ್ಚಾದ ಪುಸ್ತಕ** ತೆರೆದ-ಅಂಚೆ



ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ : ೨೬೬೧೫೮೭೭

ಶ್ರೀಮತಿ/ಶ್ರೀ..........................................................

..........................................................

..........................................................

ಮುದ್ರಕರು: 'ಇಳಾ ಮುದ್ರಣ' ನಂ.೨೬, ೪೦ ಅಡಿರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು-೨೬. ☏:೨೬೭೫೭೮೧೯೫
'ವಾರ್ತಾಪತ್ರ' ಪ್ರಾಯೋಜಕರು : ಇಳಾಮುದ್ರಣ, ಬೆಂಗಳೂರು-೨೬